ತಮ್ಮ ಅನುಭವ ವೈಶಾಲ್ಯತೆಯನ್ನು ವಿಷರವಾಗಿ ವಿಸ್ತರಿಸಿ ಸಾಮಾನ್ಯ ಜನಗಳಿಗೆ ಸುಲಭ ವೇದ್ಯವಾಗುವಂತೆ ಮಾಡಿದ್ದಾರೆ. ಇವರ ಶೈಲಿ ಸರಳವಾದರೂ ಅಲ್ಲಲ್ಲಿ ತಡೆಹಿಡಿಯುತ್ತದೆ. ಆಸ್ತಿಕ ಭಕ್ತರಿಗೆ ಪವಿತ್ರ ಗ್ರಂಥವಾಗಬಲ್ಲದು.

—ಎಂ. ಚಂದ್ರಶೇಖರ್ ಆಗಸ್ಟು ೧೯೬೮ "ಕನ್ನಡನುಡಿ"

## ಶೀಲಸಂಪಾದನೆ

ಜ.ಚ.ನಿ. ಯವರು ಯುವಕರಿಗಾಗಿಯೇ ಬರೆದಿರುವ ಕೃತಿ ಶೀಲಸಂಪಾದನೆ ನೇರವಾಗಿ ಮನವನ್ನು ಮುಟ್ಟುವ ಇವರ ಶೈಲಿ, ಎಷ್ಟು ಸರಳವೋ ಅಷ್ಟೇ ಮೋಹಕವಾಗಿದೆ. ಮನೆ ಮುರಿದರೆ ಕಟ್ಟಬಹುದು, ಮನ ಮುರಿದರೆ ಕಟ್ಟಲಾಸಲ್ಲ, ಮನಸ್ಸಿನಿಂದ ಮಾಡಿದ್ದೇ ಚಂದ. ಮನಸ್ಸಿನ ಐಕ್ಯವೇ ಐಕ್ಯ. ಈ ಮಾತುಗಳಲ್ಲಿ ತಾತ್ವಿಕ ಗಾಂಭೀರ್ಯದೊಡನೆ ಕಾಂತಾ ಸಮ್ಮಿತಿಯ ಮಾಧುರ್ಯ ಸಮ್ಮಿಳಿತವಾಗಿದೆ. ಶ್ರೀ ಕೃಷ್ಣಶರ್ಮರು ಇದನ್ನು ವಿನೋಬಾಭಾವೆಯವರ "ಶುಚಿತ್ವ–ಆತ್ಮದರ್ಶನ" ಎಂಬ ಗ್ರಂಥದೊಡನೆ ಹೋಲಿಸಿರುವುದು ಉಚಿತ. ಶೀಲದ ಬಗೆಗೆ ಶಿವಶರಣರ ಮಾನವೀಯ ಉದಾತ್ತ ಭಾವನೆಗಳನ್ನು, ಸತ್ಯ ಸುಂದರ ಕಲ್ಪನೆಗಳನ್ನು ಕಾವ್ಯಮಯ ಸರಳ ಶೈಲಿಯಲ್ಲಿ .ನಿರೂಪಿಸುವ ಈಗ್ರಂಥ ವಿದ್ಯಾರ್ಥಿಗಳು, ಜೀವನಪಥದಲ್ಲಿ ಅಡಿಯಿಟ್ಟು ಯುವಕ ಯುವತಿಯರು ಓದಲೇ ಬೇಕಾದ ಕೈಪಿಡಿಯಂತಹ ಕೃತಿ

## ಹೊಳಹು ಸುಳುಹು

ಹೊಳಹು ಸುಳುಹು ಎಂಬ ಕಿರುಹೊತ್ತಿಗೆಯಲ್ಲಿ ಜ. ಚ. ನಿ ಯವರು ನಾಮರೂಪಕ್ರಿಯೆ ಅನುಭಾವಗಳಲ್ಲಿ ಸಮಾನವಾದ ಸುಮಾರು ನೂರು"ದ್ವಂದ್ವ" ಗಳನ್ನು ಕುರಿತ ತಮ್ಮ ಅನುಭವವನ್ನು ವಚನಶೈಲಿಯಲ್ಲಿ ವಿಸ್ಮಯಗೊಳಿಸುವ ವೈವಿಧ್ಯತೆಯಿಂದ ನಿರೂಪಿಸಿದ್ದಾರೆ.

ಬಸವಕಲ್ಯಾಣದ ಪರಿಚಯಾತ್ಮಕ ಕಿರುಹೊತ್ತಿಗೆ"ಕಂಡಕಲ್ಯಾಣ".ಮೊದಲು ಮಂಗಳವೆಡೆಯೆಂದು ಕರೆಯಲ್ಪಡುತ್ತಿದ್ದ ನಗರವೇ ಚಾಲುಕ್ಯ ರಾಜಧಾನಿಯಾಗಿ ಕಲ್ಯಾಣವೆಂಬ ಹೆಸರು ಪಡೆದಿರಬೇಕೆಂಬ ಲೇಖಕರ ಅಭಿಪ್ರಾಯ ಕುತೂಹಲಕಾರಿಯಾಗಿದೆ. ಇದು ನಿಜವಾದರೆ ಬಸವಣ್ಣನವರ ಜೀವಿತಕಾಲದ ಕೆಲವು ಸಂಧಿಗ್ಧಗಳು ಸುಲಭವಾಗಿ ಪರಿಹಾರವಾಗುವುವು.

—ಪುಟ್ಟಸ್ವಾಮಯ್ಯ—ಪ್ರಜಾವಾಣಿ, ೨೮-೭-೬೮

## ಶ್ರೀ ಜ. ಚ. ನಿ. ಅವರ
## 'ಭಾವಾನುಭಾವಗಳ ಸಂವೇದನ'

ಶ್ರೀ ಜ. ಚ ನಿ. ಅವರು ಪೀಠಾಧಿಪತಿಗಳಾಗಿದ್ದು ಸಾಹಿತ್ಯ ರಂಗದಲ್ಲಿ ವಿಸಿಷ್ಟ ಸ್ಥಾನ ಗಳಿಸಿದ್ದಾರೆ. ಆಧುನಿಕ ಭಾರತದ ಸಮನ್ವಿತ ಜೀವನ. ಪ್ರಗತಿ ಪರ ಜೀವನದ ಹೆಜ್ಜೆಗಳನ್ನು ಗುರುತಿಸುವ ಸಂವೇದನೆಯುಳ್ಳ ಕವಿಹೃದಯ, ಕವಿ ಪ್ರತಿಭೆ ಇದರಲ್ಲಿದೆ. ಶ್ರೀಗಳು ತಮ್ಮ ಕವನಗಳಿಗೆ ಆಯ್ದುಕೊಂಡ ಕೆಲವು ವಿಷಯಗಳು ತೀರ ಭಾವೋದ್ರೇಕಕ್ಕೆ ಎಡೆ ಮಾಡುವಂತಹವು. ಆದರೂ ಸಮಾಜ ಹಿತ ಪ್ರಜ್ಞೆಯ ಕವಿಯಲ್ಲಿ ಅವು ಕಾವ್ಯ ಸಂವೇದನೆಗಳಾಗಿ ಸಮತೂಕ ದಿಂದ ಮೂಡಿವೆ:

"ಸಂವೇದನ" ಕವನ ಸಂಕಲನದಲ್ಲಿ ಕವಿಗಳು ರೂಪಾಯಿಯ ಅಪಮೌಲ್ಯ ಬೆಳಗಾಂವಿಯ ಸಮಸ್ಯೆ, ಏಕ ಸದಸ್ಯ ಆಯೋಗ- ಇವುಗಳಂಥ ವಿಷಯದಲ್ಲಿಯೂ ತಮ್ಮ ಸಾತ್ವಿಕ ಸಂತಾಪ ವ್ಯಕ್ತಮಾಡಿದ್ದಾರೆ.

"ಎಲ್ಲಿ ನಿನ್ನ ಅನುಗ್ರಹ"ವೆಂಬ ಸುಂದರ ಗೀತವಂತೂ ಸಾತ್ವಿಕ ಸಂತಾಪದ ತಿಳಿ ಹೊನಲಾಗಿದೆ.

"ಅತ್ತ ಸೆಮಿನಾರು, ಇತ್ತ ಸೆಮಿನಾರು
ಸುತ್ತ ಜಾಹೀರಾತು ಸಹಸ್ರಾರು ಬದುಕಲವಕ್ಕಿಲ್ಲ ನಾರು ಬೇರು ಹೃದಯ ಮಾತ್ರ ನಂಜು ನೂರು"

ಸ್ವತಂತ್ರ ಭಾರತದ ಈ ಹುಚ್ಚಾಟ ಒಟ್ಟು ಮಾನವ ಜೀವಿತದ ತೂಕಲ ಕಂಡು ಕರಗಿದ ಕವಿಗಳು ಕೊನೆಗೆ...ಮುಗಿಲ ಮೇಲೆರಡು ಉಪಗ್ರಹ ನೆರೆಯೊಳನಂತ ಸತ್ಯಾ (ಪೂರ್ವ) ಗ್ರಹ
ಬಗೆಯೊಳನೇಕ ದುರಾಗ್ರಹ ಇವುಗಳೊಳೆಲ್ಲಿ ನಿನ್ನನುಗ್ರಹ ?"
ಎಂದು ವ್ಯಥಿತ ಹೃದಯದಿಂದ ಪ್ರಾರ್ಥನೆ ಮಾಡುತ್ತಾರೆ.

### ಮತಾತೀತ ಸಂವೇದನೆ

ಬಾಹ್ಯ ಜೀವನದ ಬಗೆಗೆ ಎಚ್ಚರವಿದ್ದ ಈ ಕವಿಗಳ ಹೃದಯ ಅಂತರಂಗ ದಲ್ಲಿ ಸದಾಶಿವನಿಗಾಗಿ ಮೊರೆಯುತ್ತದೆ. ಈ ಹೃದಯದ ಮೊರೆತ ಬರಿ ಮತಾ ಚಾರದ ಪರಿಭಾಷೆಯಲ್ಲ. ನೆಲದ ಬಂಧನದಿಂದ ಜೀವ ಬಿಡುಗಡೆ ಹೊಂದಿ

ಮಂಗಲ ಭಾವದಲ್ಲಿ ನಿಲ್ಲಿಸಲು ಸತತ ಹೋರಾಟ ನಡೆಸಿರುತ್ತದೆ. 'ಸಂ–ವೇದನ' ಹಾಗೂ 'ಭಾವಗೀತಾಂಜಲಿ–ಎಂಬ ಎರಡು ಕವನ ಸಂಕಲನಗಳಲ್ಲಿಯೂ ಈ ಬಗೆಯ ಹೋರಾಟದ ಚಿತ್ರ ಕಾಣುತ್ತದೆ.

"ಎಲ್ಲ ಕದಗಳು ತೆರೆದಿವೆ ನೋಡು ಓ ಮಾಯಿ
ಕುಲ್ಲನಾಯಿಯು ನುಗ್ಗಿದೆ ತೆರೆದು ತಾ ಬಾಯಿ
ಮಾಯಿ ನೀನಾಗಿ ಮನೆಯ ಕೆಡಿಸದಂತಿರು ನಿ
ಮ್ಮಾಯಿ ನೀನಾಗಿ ಮನೆಯ ಮಡಿಯುಳಿಸು ಮಾನಿನಿ !

ಅಂತರಂಗ ಸುದ್ಧಿಯ ಈ ಹಂಬಲ ತುಂಬ ಮನೋಹರ ! ಇಂಥ ಅನೇಕ ಪ್ರಾರ್ಥನಾ ಗೀತಗಳು 'ಭಾವಗೀತಾಂಜಲಿ'ಯ ತುಂಬ ಇವೆ. ಪ್ರೊ॥ ಎಸ್. ಆರ್. ಮಳಗಿಯವರು ಮುನ್ನುಡಿಯಲ್ಲಿ ಹೇಳಿದಂತೆ "ಸಹೃದಯದ ಹೃದಯ ವಂತಿಕೆಗೆ ಆರೋಗ್ಯಕರ ಪುಷ್ಟಿ" ಈಯುತ್ತಿರುವ ಗೀತೆಗಳಿವು.

ಶ್ರೀ ಜ. ಚ. ನಿ ಅವರು ವಿಶಿಷ್ಟಮತದ ಮಠಾಧಿಪತಿಗಳಾಗಿದ್ದುದ ರಿಂದ ಮತದ ಪರಿಭಾಷೆಯನ್ನು ಬಳಸುವದು ಸ್ವಾಭಾವಿಕ. ತಮ್ಮ ಶ್ರದ್ಧೆಯ ಹಿರಿಮೆ ಗರಿಮೆಗಳ ಎಚ್ಚರದ ನುಡಿಯಾಡುವದೂ ಸ್ವಾಭಾವಿಕ. ಅದರೊಡನೆ ಈ ಮತ ಪರಿಭಾಷೆ ಸರ್ವಮತೀಯ ಭಾವಸಂವೇದನೆಯ ವಾಹನವಾಗುವಂತೆ ಮಾಡುತ್ತಿರುವುದು ಅವರ ಸಮತೂಕದ–ನವ ಭಾರತ ಪ್ರಜ್ಞೆಗೆ ಸಾಕ್ಷಿಯಾಗಿದೆ.

## ಭಾವ–ಕಲ್ಪನೆಗಳ ಬಹುಮುಖ

'ಸಂ-ವೇದನೆ'ಯಲ್ಲಿಯ ನಲವತ್ತಾರು ಪದ್ಯಗಳೂ ಭಾವಗೀತಾಂಜಲಿ'ಯ ಐವತ್ತು ಮೂರು ಪದ್ಯಗಳೂ ಈ ಕವಿಗಳ ವ್ಯಕ್ತಿತ್ವದ ಬಹುಮುಖ ಅನುಸಂಧಾ ನಕ್ಕೆ ಕನ್ನಡಿ ಹಿಡಿದಿವೆ.

ಕೆಲವು ಕವನಗಳು ಕಲ್ಪನಾ ವಿಲಾಸದ ಚಮತ್ಕಾರದಿಂದ ಬಾದು ತತ್ವ ವನ್ನು ವಿಸ್ತರಿಸಿ ತೋರಿದರೆ, ಮತ್ತೆ ಕೆಲವು ಕವನಗಳು ಯುಕ್ತಿ ಚಮತ್ಕಾರ, ಲಯಬದ್ಧ ಪದಸಂಯೋಜನೆಗಳ ಸ್ವಾರಸ್ಯದಿಂದ ವಿಚಾರ ಮಾಲಿಕೆಗಳಾಗಿವೆ.

"ಅಂಗಸುಖ ರಾಗರಸ । ಲಿಂಗಸುಖ ಯೋಗರಸ
ಅಂಗ ಲಿಂಗ ಸಮರಸ । ಲಿಂಗ ಮೋಕ್ಷ' ಫಲರಸ"

ಇಂಥ ಪದಗಳ ಉಕ್ತಿಶಕ್ತಿಯಿಂದ ರಸಾನುಭವದ ವಿವೇಕ ಪ್ರಭಾವಯುತ ವಾಗಿ ಹೊಳೆಯುತ್ತದೆ. ಅವರು ತಮ್ಮ ಗ್ರಂಥಗಳಿಗೆ ಬರುವ ಪ್ರಸ್ತಾವನೆಗಳ ಗದ್ಯದಲ್ಲಿಯೂ ಈ ಉಕ್ತಿ ಲೀಲೆಗೆ ಹೆಚ್ಚಿನ ಅವಕಾಶ ನೀಡುತ್ತಾರೆ. ಆದರೆ ಇದು ಕೇವಲ ಭಾಷಾ ಪಾಂಡಿತ್ಯದ ಪರಿಣಾಮವಲ್ಲ; ವಿವಿಧ ಭಾವ-ವಿವಿಧ ಕಲ್ಪನೆ ಗಳ ವಿವೇಕದಿಂದ ಉದ್ದೀಪಿತವಾದ ಒಂದು ಶೈಲಿ ವಿಶೇಷ.

## ಸಮನ್ವಿತ ಸಂವೇದನೆ

ಈ ಎಲ್ಲ ಭಾವ, ಕಲ್ಪನೆ, ಉಕ್ತಿ ಚಮತ್ಕಾರಗಳ ಹಿಂದೆ ಇರುವುದು ಸಮ ನ್ವಯ ದರ್ಶನದ ಹಂಬಲು ಹಾಗೂ ವಿವೇಕ. ಕವಿಗಳಿಗೆ ಕೇವಲ ಪಾಂಡಿತ್ಯದ ತಾಕಲಾಟದಲ್ಲಿ ನಿಲ್ಲುವ ಅಭಿರುಚಿಯಿಲ್ಲ. ಅವರು ಪ್ರಧಾನವಾಗಿ ಸುಕುಮಾರ ಸತಿಭಾವದಿಂದ ಶಿವನತ್ತ ಸಾಗಿದ ಶರಣ ಜೀವ. ಈ ಅನುಸಂಧಾನದಲ್ಲಿ ತನ್ನ ಮಾರ್ಗಕ್ರಮಣವು ಧರ್ಮ-ವಿವೇಕ-ಎಚ್ಚರಗಳಿಂದ ಕೂಡಿರುವುದಕ್ಕಾಗಿ ಹಂಬ ಲಿಸುತ್ತದೆ. ಆದ್ದರಿಂದಲೇ ಬಾಳಿನ ಜಂಜಡ-ತೊಡಕುಗಳನ್ನು ಅರಿಯಲು, ಬಿಡಿಸಲು, ಸಮನ್ವಿತ ಮುಖ ಕಾಣಲು ಪರಿತಪಿಸುತ್ತದೆ. ಇದೇ ಜ. ಚ. ನಿ. ಅವರ ಕವನ ಗಾನದ ಸಂಕೀರ್ಣತೆಯ ಮೂಲ.

ಶಿವಭಕ್ತಿಯ ಹಂಬಲ ಅದರೊಳಗಿನ ಸರಳ ಸುಂದರ ಮುಖ. ಆ ಮುಖ ದಿಂದ ಪ್ರಕೃತಿ ಗೀತ ಬರಲಿ. ಪ್ರಾಣಿಶ್ರಮ ಮೂಡಲಿ. ರಾಷ್ಟ್ರದೃಷ್ಟಿ ಜಾಗತಿಕ ದೃಷ್ಟಿ ಅನುಭವ ದೃಷ್ಟಿಯ ಭಾವಲಹರಿ ಹರಿಯಲಿ-ಏನಾದರೂ ಸಮನ್ವಿತ ಸಂವೇದನೆಯು ಸಹಜ ಭಕ್ತಿಯ ಉದ್ಗಾರವಾಗಿ ಹರಿಯುವವು.

— ಆರ್. ಜಿ. ಕುಲಕರ್ಣಿ
ಸಂಯುಕ್ತ ಕರ್ನಾಟಕ
27-11-67

## 'ಪ್ರತಿಭಾಸಿದ್ಧರು ಪಂಡಿತಾರಾಧ್ಯರು'

ಸಮ್ಯಜ್ಞಾನ ಸಾರಾಯ ಸಂಪತ್ತುಳ್ಳ ಪರಮ ಶ್ರೀಮಂತ, ಮಹಾ ಜ್ಞಾನ ಸಂಪನ್ನ ಮಹಂತ, ಪ್ರಕಾಂಡ ಪಾಂಡಿತ್ಯದಿಂದ ತೊಳಗಿ ಬೆಳಗುವ ಘನವಂತ

ಎಣಿಸಿದವರೇ ಶಿವಾನುಭವ ಸಂಪನ್ನರಾದ ಶ್ರೀ ಪಂಡಿತಾರಾಧ್ಯರು. ಶಿವಾಗಮ ಕೋವಿದರು, ಶಿವಶ್ರೀಯಯುತರು ಆದ ಇವರ ದಿವ್ಯ ಚರಿತ್ರೆಯೇ ನಮ್ಮ ಮುಂದಿರುವ ಪ್ರಕೃತ ಪುಸ್ತಕ.

ರೇವಣಸಿದ್ಧ, ಮರುಳಸಿದ್ಧ ಏಕೋರಾಮರೆಂಬ ಸಿದ್ಧತ್ರಯರಿಗಿಂತಲೂ, ವಿಶ್ವಾರಾಧ್ಯರಿಗಿಂತಲೂ ಪಂಡಿತಾರಾಧ್ಯರು ಪ್ರಾಚೀನರು. ಇವರ ಕಾಲ 8ನೇ ಶತಮಾನಕ್ಕೂ ಹಿಂದಿನದೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಅದನ್ನು ಕರ್ನೂಲು ಜಿಲ್ಲೆಯ ಪಾಣಂ ಗ್ರಾಮದ ಶಾಸನವೇ ಸೂಚಿಸುತ್ತದೆ.

ಇದರ ಜೊತೆಗೆ 8ನೆಯ ಶತಮಾನಕ್ಕೆ ಹಿಂದಿದ್ದ ಶ್ರೀ ನೀಲಕಂಠ ಶಿವಾಚಾರ್ಯರನ್ನು ಇವರೊಡನೆಯೂ ಇವರ ನಂತರವೂ ಇರುವ ಶ್ರೀ ಶಂಕರಾಚಾರ್ಯರನ್ನು ನಿರ್ದೇಶಿಸಿದ ಬಳಿಕ ಮೂರನೆಯವರನ್ನಾಗಿ ಶ್ರೀ ಪಂಡಿತಾರಾಧ್ಯರನ್ನು ನಿರ್ದೇಶಿಸಿರುವುದು ನಿಜಕ್ಕೂ ಗಮನಾರ್ಹ. ಅಂತೆಯೇ ಶೈವಾಚಾರ್ಯರಲ್ಲಿ ಪಂಡಿತಾರಾಧ್ಯರಿಗೆ ಪ್ರಖ್ಯಾತಿ. ಜೊತೆಗೆ ಶ್ರೀ ಶಂಕರರ ಸಮಕಾಲೀನತೆ ವ್ಯಕ್ತವಾಗುತ್ತದೆ.

ಪ್ರಾಚೀನ ಸಂಸ್ಕೃತ ವಾಙ್ಮಯದಲ್ಲಿ ಸಿದ್ಧತ್ರಯರು, ಆಚಾರ್ಯತ್ರಯರೂ, ಪಂಡಿತರು ಯಾರೆಂದು ಸ್ಪಷ್ಟ ಉಲ್ಲೇಖವಿದೆ. ಈ ಮೇರೆಗೆ ರೇವಣ, ಮರುಳ ಏಕೋರಾಮ ಸಿದ್ಧತ್ರಯರು ; ಶ್ವೇತಾಚಾರ್ಯ, (ಪಂಡಿತ) ಲಕುಲೀಶಾಚಾರ್ಯ, ನೀಲಕಂಠಾಚಾರ್ಯರು ಆಚಾರ್ಯತ್ರಯರು ; ಉದ್ಭಟಾರಾಧ್ಯ, ಕೋಟಿಪಲ್ಲಾ (ವಿಶ್ವಾ)ರಾಧ್ಯ, ವೇಮಾರಾಧ್ಯರು ಆರಾಧ್ಯತ್ರಯರು ; ಶ್ರೀಪತಿ, ಮಂಚನ ಮಲ್ಲಿಕಾರ್ಜುನರು ಪಂಡಿತತ್ರಯರು.

ಅಂತೂ ಆ ಮಹಾ ವ್ಯಕ್ತಿತ್ವದ ಪರಿಚಯ ಪಡೆಯಬೇಕೆಂಬ ಜಿಜ್ಞಾಸುಗಳಿಗೆ ಇದು ಪರಮ ಕುತೂಹಲಕಾರಿಯಾದ ಕೃತಿ. ಮಲ್ಲಿಕಾರ್ಜುನ ಪಂಡಿತರಿಗಿಂತ ಪ್ರತ್ಯೇಕರಾದವರು ಶ್ರೀ ಶೈಲರ ಪ್ರಥಮ ಪಂಡಿತಾರಾಧ್ಯರು ಎಂಬುದನ್ನು ಈ ಕೃತಿ ಸ್ಪಷ್ಟ ಪಡಿಸುತ್ತದೆ. ಇಂಥ ಸುಪ್ರೌಢ ಕೃತಿಯನ್ನು ನಾಡಿಗೆ ಇತ್ತ ಶ್ರೀ ಜ. ಚ. ನಿ. ಅವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

—ಅ. ವೆಂ.

ಸಂಯುಕ್ತ ಕರ್ನಾಟಕ ೧೧-೧೨-೬೭

